# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೧೫ (ಫಾಲ್ಗುಣ ೭, ಶಕ ವರ್ಷ ೧೯೩೬)<br>Bengaluru, Thursday, February 26, 2015 (Phalguna 7, Shaka Varsha 1936) | ಸಂಚಿಕೆ ೯<br>Issue 9 |
|---|---|---|

## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ವಿಶೇಷ ನೇಮಕಾತಿ ಸಮಿತಿ ಮುಖ್ಯ ಇಂಜಿನಿಯರ್ ರವರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಗ್ರಾಮೀಣಾಭಿವೃದ್ಧಿ ಭವನ, 2ನೇ ಮಹಡಿ, ಆನಂದರಾವ್ ವೃತ್ತ, ಬೆಂಗಳೂರು–560009.**

**ಅಧಿಸೂಚನೆ**

**ಸಂ: ಮುಇಂ:ಪಂರಾಇಂಇ:ಬೆಂ:ಸಿ–8:ಸಇಂ–ನೇ.ನೇಮ:2014–15/11156 ದಿನಾಂಕ:25/02/2015**

ಉಲ್ಲೇಖ : 1. ಸರ್ಕಾರದ ಅಧಿಸೂಚನೆ ಸಂ:ಗ್ರಾಅಪ 30 ಸೇಶಿಕಾ 2015(I)ದಿನಾಂಕ: 13–2–2015

2. ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಮುಇಂ:ಪಂರಾಇಂ: ಬೆಂಸಿ–8: ಸಿಂ–ಕಿಇಂ–ನೇ.ನೇ.ಮ: 2014–15:9041 ದಿನಾಂಕ: 24–1–2015

ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ (ಸಹಾಯಕ ಇಂಜಿನಿಯರ್ ಮತ್ತು ಕಿರಿಯ ಇಂಜಿನಿಯರ್ ವೃಂದಗಳಿಗೆ ನೇಮಕಾತಿ) (ವಿಶೇಷ)ನಿಯಮಗಳು 2014 ಹಾಗೂ ಸದರಿ ನಿಯಮಕ್ಕೆ ತಂದಿರುವ (ವಿಶೇಷ)(ತಿದ್ದುಪಡಿ) ನಿಯಮಗಳು, 2015 ರಂತೆ **ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಖಾಲಿ ಇರುವ 207 ಗ್ರೂಪ್–ಬಿ ದರ್ಜೆಯ ಸಹಾಯಕ ಇಂಜಿನಿಯರ್ ಹುದ್ದೆಗಳಿಗೆ ಸಿವಿಲ್ ಇಂಜಿನಿಯರಿಂಗ್ ಪದವಿ ವಿದ್ಯಾರ್ಹತೆ ಹೊಂದಿದವರನ್ನು** ನೇಮಿಸುವ ಸಲುವಾಗಿ ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ON-LINE ಮೂಲಕ ಆಹ್ವಾನಿಸಲಾಗಿದೆ. ಸದರಿ ನೇಮಕಾತಿ ಕುರಿತ ವಿವರಗಳು ಕೆಳಕಂಡಂತೆ ಇವೆ.

**I. ಹುದ್ದೆಗಳ ವರ್ಗ, ಖಾಲಿ ಹುದ್ದೆಗಳ ಸಂಖ್ಯೆ ಮತ್ತು ವಿದ್ಯಾರ್ಹತೆ :–**

| ಕ್ರ.ಸಂ. | ವೃಂದಗಳ ಹೆಸರು | ಖಾಲಿ ಹುದ್ದೆಗಳ ಸಂಖ್ಯೆ | ವಿದ್ಯಾರ್ಹತೆ |
|---|---|---|---|
| 1 | ಸಹಾಯಕ ಇಂಜಿನಿಯರ್(ಸಿವಿಲ್) (ರೂ. 22800–43200) | ಸಿವಿಲ್= 207 | ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಪದವಿ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು. |

**II. ಹುದ್ದೆಗಳ ಮೀಸಲಾತಿ ವರ್ಗೀಕರಣ :**

(ಎ) ಸಹಾಯಕ ಇಂಜಿನಿಯರ್

| ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಖಾಲಿ ಹುದ್ದೆಗಳು | | ಕೋಷ್ಟಕ–ಎ ಮೀಸಲಾತಿ ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | ಪ.ಜಾ. | ಪ.ಪಂ. | ಪ್ರ–1 | ಪ್ರ–2(ಎ) | ಪ್ರ–2(ಬಿ) | ಪ್ರ–3(ಎ) | ಪ್ರ–3(ಬಿ) | ಸಾ.ವ. | ಒಟ್ಟು |
| ಸಹಾಯಕ ಇಂಜಿನಿಯರ್ ವೇತನ ಶ್ರೇಣಿ: ರೂ.22800–600–24600–700–28800–800– | ಸಿವಿಲ್=140 | ಇತರೆ | 6 | 1 | 1 | 6 | 1 | 1 | 1 | 19 | 36 |
| | | ಮ.ಅ. | 6 | 2 | 2 | 6 | 2 | 2 | 2 | 21 | 43 |
| | | ಗ್ರಾ.ಅ | 5 | 1 | 2 | 5 | 2 | 1 | 2 | 18 | 36 |
| | | ಅಂ.ವಿ.ಅ | 1* | 1* | 1* | 1* | 1* | 1* | 1* | 2 (1*/ 1**) | 9 |

| | | | | | | | | | | | |
|---|---|---|---|---|---|---|---|---|---|---|---|
| 33600–900–39000–1050–43200 | | ಮಾಸೈಅ | 2 | 0 | 0 | 2 | 0 | 0 | 0 | 7 | 11 |
| | | ಕ.ಮಾಅ | 1 | 0 | 0 | 1 | 0 | 0 | 0 | 3 | 5 |
| | | **ಒಟ್ಟು** | **21** | **5** | **6** | **21** | **6** | **5** | **6** | **70** | **140** |
| | | * ಶ್ರವಣದೋಷ (Hearing impairment)/ ಚಲನವಲನ ವೈಕಲ್ಯ (Locomotor disability or Cerebreal palsy- (H.I./LD or CP) ಅಭ್ಯರ್ಥಿಗಳಿಗೆ | | | | | | | | | |
| | | ** ಶ್ರವಣದೋಷ (Hearing impairment - H.I.) ಅಭ್ಯರ್ಥಿಗಳಿಗೆ | | | | | | | | | |
| | | **ಕೋಷ್ಟಕ–ಬಿ** | | | | | | | | | |
| ಸಹಾಯಕ ಇಂಜಿನಿಯರ್ ವೇತನ ಶ್ರೇಣಿ: ರೂ.22800–600–24600–700–28800–800–33600–900–39000–1050–43200 | ಸಿವಿಲ್=67 | | ಹೈದ್ರಾಬಾದ್–ಕರ್ನಾಟಕ ಪ್ರದೇಶ ಸ್ಥಳೀಯ ವೃಂದಗಳಲ್ಲಿ ಮೀಸಲಿರಿಸಿರುವ ಹುದ್ದೆಗಳ ಸಂಖ್ಯೆ –67 | | | | | | | | |
| | | | ಮೀಸಲಾತಿ ವರ್ಗೀಕರಣ | | | | | | | | |
| | | | ಪ.ಜಾ. | ಪ.ಪಂ. | ಪ್ರ–1 | ಪ್ರ–2(ಎ) | ಪ್ರ–2(ಬಿ) | ಪ್ರ–3(ಎ) | ಪ್ರ–3(ಬಿ) | ಸಾ.ವ. | ಒಟ್ಟು |
| | | ಇತರೆ | 3 | 1 | 1 | 2 | 1 | 1 | 1 | 9 | 19 |
| | | ಮ.ಅ. | 3 | 1 | 1 | 3 | 1 | 1 | 1 | 10 | 21 |
| | | ಗ್ರಾ.ಅ | 3 | 0 | 1 | 3 | 1 | 0 | 1 | 9 | 18 |
| | | ಅಂ.ವಿ.ಅ | 1* | 0 | 0 | 1* | 0 | 0 | 0 | 1* | 3 |
| | | ಮಾಸೈಅ | 1 | 0 | 0 | 1 | 0 | 0 | 0 | 3 | 5 |
| | | ಕ.ಮಾಅ | 0 | 0 | 0 | 0 | 0 | 0 | 0 | 1 | 1 |
| | | **ಒಟ್ಟು** | **11** | **2** | **3** | **10** | **3** | **2** | **3** | **33** | **67** |
| ಒಟ್ಟು | 207 | * ಶ್ರವಣದೋಷ (Hearing impairment)/ ಚಲನವಲನ ವೈಕಲ್ಯ (Locomotor disability or Cerebreal palsy (H.I. / LDor CP) ಅಭ್ಯರ್ಥಿಗಳಿಗೆ | | | | | | | | | |

**ಟಿಪ್ಪಣಿ :**

1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 48 ಸೇನೆನಿ2012 ದಿನಾಂಕ 10/6/2013 ಮತ್ತು ಸರ್ಕಾರಿ ಆದೇಶ ಸಂ. ಸಿಆಸುಇ 128 ಸೇನೆನಿ 2006 ದಿನಾಂಕ 1/8/2009 ರಂತೆ ಹಾಗೂ ಆದೇಶ ಸಂ. ಸಿಆಸುಇ 53 ಸೇನೆವಿ 2007 ದಿನಾಂಕ 4/1/2008 ಮತ್ತು ಆದೇಶ ಸಂ. ಸಿಆಸುಇ 08 ಸೇನಿನ 95 ದಿನಾಂಕ 20/6/1995ರಲ್ಲಿ ನಿಗದಿಪಡಿಸಿರುವ ರೋಸ್ಟರ್ ಬಿಂದುವಿನ ಅನುಸಾರ, ಮೇಲ್ಕಂಡ ಹುದ್ದೆಗಳಿಗೆ ವಿವಿಧ ವರ್ಗದ ಸಮತಳ (Horizontal) ಮೀಸಲಾತಿಯನ್ನು ವರ್ಗೀಕರಿಸಲಾಗಿದೆ.
2. ಸರ್ಕಾರದ ಅಧಿಸೂಚನೆ–2 ಸಂಖ್ಯೆ ಡಿಪಿಎಆರ್/526/ಎಸ್‌ಆರ್‌ಆರ್/2014 ದಿನಾಂಕ 23/12/2014ರಲ್ಲಿ ಅಂಗವಿಕಲ ಉಪಗುಂಪುಗಳಿಗೆ ಸಹಾಯಕ ಇಂಜಿನಿಯರ್(ಸಿವಿಲ್) ಹುದ್ದೆಗಳನ್ನು ಗುರ್ತಿಸಿ ಅಧಿಸೂಚಿಸಿರುವಂತೆ ಮೀಸಲಾತಿ ವರ್ಗೀಕರಿಸಿದ್ದು, ಇದರಂತೆ ಅಂಗವಿಕಲ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

**ವಿಶೇಶ ಸೂಚನೆ :–**

1. ಮೇಲೆ ತಿಳಿಸಿರುವ ಕೋಷ್ಟಕದಲ್ಲಿನ ಹುದ್ದೆಗಳ ಸಂಖ್ಯೆ ಮತ್ತು ಮೀಸಲಾತಿ ವರ್ಗೀಕರಣವು ಸರ್ಕಾರದ ಆದೇಶದ ಮೇರೆಗೆ ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.
2. ಅಭ್ಯರ್ಥಿಗಳು ಸಹಾಯಕ ಇಂಜಿನಿಯರ್ (ಸಿವಿಲ್)/ ಸಹಾಯಕ ಇಂಜಿನಿಯರ್ (ಸಿವಿಲ್) (ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ಮೀಸಲಿಟ್ಟಿರುವ) ಈ ಎರಡು ಹುದ್ದೆಗಳಿಗೆ ಒಂದೇ ಅರ್ಜಿ ಸಲ್ಲಿಸುವಂತಿಲ್ಲ. ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಪ್ರತ್ಯೇಕ ಶುಲ್ಕ ಪಾವತಿಸತಕ್ಕದ್ದು.
3. ಹೈದ್ರಾಬಾದ್ ಕರ್ನಾಟಕ ಪ್ರದೇಶ ಸ್ಥಳೀಯ ವೃಂದಗಳಿಗೆ ಮೀಸಲಿರಿಸಿರುವ ಸಹಾಯಕ ಇಂಜಿನಿಯರ್ (ಸಿವಿಲ್)ಹುದ್ದೆಗಳಿಗೆ ಬೀದರ್/ಕಲಬುರಗಿ/ಯಾದಗಿರಿ/ರಾಯಚೂರು/ಕೊಪ್ಪಳ/ಬಳ್ಳಾರಿ ಜಿಲ್ಲೆಗಳಿಗೆ ಸೇರಿದ ಸ್ಥಳೀಯ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಬೇಕು.
4. ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಸ್ಥಳೀಯ ಅಭ್ಯರ್ಥಿಗಳು ಇತರೆ ಸಹಾಯಕ ಇಂಜಿನಿಯರ್(ಸಿವಿಲ್)ಹುದ್ದೆಗಳಿಗೂ(ಅಂದರೆ ರಾಜ್ಯ ಮಟ್ಟದ ಹುದ್ದೆ) ಸಹ ಅರ್ಜಿ ಸಲ್ಲಿಸಬಹುದು.
5. ಅರ್ಜಿಗಳನ್ನು ಆನ್‌ಲೈನ್ (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ಅವಕಾಶ ಇರುವುದಿಲ್ಲ.

6. ಅಭ್ಯರ್ಥಿಗಳು ಆನ್‌ಲೈನ್ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡುವ ಮುನ್ನ ಅಧಿಸೂಚನೆಯಲ್ಲಿ ತಿಳಿಸಿರುವ ಸೂಚನೆಗಳನ್ನು ಕಡ್ಡಾಯವಾಗಿ ಓದತಕ್ಕದ್ದು ಹಾಗೂ ನೀಡಿರುವ ಸೂಚನೆಗಳನ್ವಯ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.
7. **ಅಭ್ಯರ್ಥಿಗಳು ತಪ್ಪು ಮಾಹಿತಿ ನೀಡಿ ಅರ್ಜಿ ಸಲ್ಲಿಸಿದಲ್ಲಿ, ಅಂತಹವರ ವಿರುದ್ಧ ಇಲಾಖೆಯು ಕಾನೂನಿನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.**

ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಪುಂಜಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು.

| | | | | | |
|---|---|---|---|---|---|
| ಪ.ಜಾ. | – | ಪರಿಶಿಷ್ಟ ಜಾತಿ | ಇತರೆ | – | ಇತರೆ ಅಭ್ಯರ್ಥಿ |
| ಪ.ಪಂ. | – | ಪರಿಶಿಷ್ಟ ಪಂಗಡ | ಮ.ಅ. | – | ಮಹಿಳಾ ಅಭ್ಯರ್ಥಿ |
| ಪ್ರ.–1 | – | ಪ್ರವರ್ಗ–1 | ಗ್ರಾ.ಅ | – | ಗ್ರಾಮೀಣ ಅಭ್ಯರ್ಥಿ |
| ಪ್ರ–2ಎ | – | ಪ್ರವರ್ಗ–2ಎ | ಅಂ.ವಿ.ಅ | – | ಅಂಗವಿಕಲ ಅಭ್ಯರ್ಥಿ |
| ಪ್ರ–2ಬಿ | – | ಪ್ರವರ್ಗ–2ಬಿ | ಮಾಸೈಅ | – | ಮಾಜಿ ಸೈನಿಕ ಅಭ್ಯರ್ಥಿ |
| ಪ್ರ–3ಎ | – | ಪ್ರವರ್ಗ–3ಎ | ಕ.ಮಾ.ಅ | – | ಕನ್ನಡ ಮಾಧ್ಯಮ ಅಭ್ಯರ್ಥಿ |
| ಪ್ರ–3ಬಿ | – | ಪ್ರವರ್ಗ–3ಬಿ | | – | |
| ಸಾ.ವ. | – | ಸಾಮಾನ್ಯ ವರ್ಗ | | – | |

**III. ನೇಮಕಾತಿ ವಿಧಾನ :–**

ಪ್ರತಿಯೊಂದು ವೃಂದದ ಹುದ್ದೆಯ ಅರ್ಹತಾ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟಾರೆ ಶೇಕಡಾವಾರು ಅಂಕಗಳನ್ನು ಆಧರಿಸಿ ಅರ್ಹತಾ ಕ್ರಮಾನುಸಾರ ಹುದ್ದೆಗಳಿಗೆ ಕಲ್ಪಿಸಿರುವ ಮೀಸಲಾತಿಗೆ ಒಳಪಟ್ಟು, ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

1. ಹುದ್ದೆಗಳ ನೇಮಕಾತಿಯನ್ನು ನಿಯಮಗಳಲ್ಲಿ ನಿಗಧಿಪಡಿಸಿರುವ ಅರ್ಹತಾ ಪದವಿಯ ಎಲ್ಲಾ ವರ್ಷ/ಸೆಮಿಸ್ಟರ್‌ಗಳ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಜೇಷ್ಠತೆಯನುಸಾರ ಮಾಡಲಾಗುವುದರಿಂದ, ಅಭ್ಯರ್ಥಿಗಳು ಅಂಕಗಳನ್ನು ಸ್ಪಷ್ಟವಾಗಿ ಅರ್ಜಿಯಲ್ಲಿ ನಮೂದಿಸತಕ್ಕದ್ದು.
2. ಅಧಿಸೂಚನೆಯಲ್ಲಿ ತಿಳಿಸಿರುವ ಸಿವಿಲ್ ಸಹಾಯಕ ಇಂಜಿನಿಯರ್ ಹುದ್ದೆಗಳ ಸಂಖ್ಯೆಗೆ ಸೀಮಿತವಾಗಿ ಸಿವಿಲ್ ಇಂಜಿನಿಯರಿಂಗ್ ಪದವಿ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.

**IV. ನಿಗದಿತ ಅರ್ಜಿ ಶುಲ್ಕ:–** ಪಾವತಿಸಬೇಕಾಗಿರುವ ಶುಲ್ಕ ಹಾಗೂ ವಿಧಾನ –

| | |
|---|---|
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ 3ಬಿಗೆ ಸೇರಿದ ಅಭ್ಯರ್ಥಿಗಳಿಗೆ | ರೂ.200/– |
| ಪ.ಜಾ, ಪ.ಪಂ., ಪ್ರವರ್ಗ–I ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ | ಶುಲ್ಕ ವಿನಾಯಿತಿ ಇರುತ್ತದೆ |
| ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ರೂ.25/– |

1) ನಿಗದಿತ ಶುಲ್ಕವನ್ನು ಇಲಾಖಾ ವೆಬ್‌ಸೈಟ್‌ನಲ್ಲಿ ನೀಡಲಾದ ಲಿಂಕ್ ಮುಖಾಂತರ ಕರ್ನಾಟಕದ ಯಾವುದೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬ್ಯಾಂಕ್‌ನ 'SBI Collect' ಮೂಲಕ Debit / Credit Card ಚಲನ್ ಸೌಲಭ್ಯದ ಮೂಲಕ ಅಥವಾ ಎಲೆಕ್ಟ್ರಾನಿಕ್ ಅಂಚೆ ಕಛೇರಿಗಳಲ್ಲಿ ಚಲನ್ ಮೂಲಕ ಪಾವತಿಸತಕ್ಕದ್ದು. SBI Collect / ಅಂಚೆ ಕಛೇರಿಯ ಚಲನ್ ಪ್ರತಿಯನ್ನು RDPR ವೆಬ್‌ಸೈಟ್‌ನಿಂದ ಪ್ರಿಂಟ್ ಮಾಡಿಕೊಳ್ಳಬೇಕು. ಇದನ್ನು ಹೊರತುಪಡಿಸಿ, ಯಾವುದೇ ಡಿಮ್ಯಾಂಡ್ ಡ್ರಾಫ್ಟ್/ಪೋಸ್ಟಲ್‌ಆರ್ಡರ್/ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ಸಾರಾ ಸಗಟಾಗಿ ತಿರಸ್ಕರಿಸಲಾಗುವುದು.

2) **ಈ ಹಿಂದೆ ಸಹಾಯಕ ಇಂಜಿನಿಯರ್ ಹುದ್ದೆಗೆ ಅಗತ್ಯ ಅರ್ಜಿ ಶುಲ್ಕ ಪಾವತಿಸಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಮತ್ತೆ ಶುಲ್ಕ ಪಾವತಿಸುವಂತಿಲ್ಲ ಆದರೆ ಅರ್ಜಿಯನ್ನು ಮಾತ್ರ ಸಂಪೂರ್ಣ ಮಾಹಿತಿಯೊಂದಿಗೆ ಮತ್ತೊಮ್ಮೆ ಸಲ್ಲಿಸಲೇಬೇಕು.**

ಅಂಚೆ ಸಹಾಯವಾಣಿ : 080–22392600

IV. **ವಯೋಮಿತಿ** :– ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಈ ಕೆಳಕಂಡಂತೆ ವಯೋಮಿತಿ ಹೊಂದಿರತಕ್ಕದ್ದು.

| **ವರ್ಗ** | **ಕನಿಷ್ಠ ವಯೋಮಿತಿ** | **ಗರಿಷ್ಠ ವಯೋಮಿತಿ** |
|---|---|---|
| ಸಾಮಾನ್ಯ ಅಭ್ಯರ್ಥಿಗಳಿಗೆ | 18 ವರ್ಷಗಳು | 35 ವರ್ಷಗಳು |
| ಪ್ರವರ್ಗ–IIಎ, IIಬಿ, IIIಎ IIIಬಿ ಅಭ್ಯರ್ಥಿಗಳಿಗೆ | 18 ವರ್ಷಗಳು | 38 ವರ್ಷಗಳು |
| ಪ.ಜಾ, ಪ.ಪಂ. ಹಾಗೂ ಪ್ರವರ್ಗ–Iರ ಅಭ್ಯರ್ಥಿಗಳಿಗೆ | 18 ವರ್ಷಗಳು | 40 ವರ್ಷಗಳು |

ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ ಅಥವಾ ಜನನ ದಿನಾಂಕ ತೋರಿಸಿರುವ ಸಂಚಿತ ದಾಖಲೆಯ ಉದ್ಧೃತ ಭಾಗದಲ್ಲಿ (SSLC Cumulative Record extract ನಲ್ಲಿರುವಂತೆ) ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಪರಿಗಣಿಸಲಾಗುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

**ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಾವಳಿಗಳ ನಿಯಮ 6ರಂತೆ ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು, ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.**

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳಿಂದ ಹೆಚ್ಚಿಸಬೇಕು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಗರಿಷ್ಠ ವಯೋಮಿತಿಯನ್ನು ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳಿಂದ ಹೆಚ್ಚಿಸಬೇಕು.

**ವಿವರಣೆ :–** ಮಾಜಿ ಸೈನಿಕ ಎಂದರೆ,

(1) ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ. ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವರು.

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

i) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು

ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ

iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು]

**ವಿವರಣೆ :–** ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

ಎ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದಲ್ಲಿ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

ಬಿ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು/ಅವಳು ಅಂತಹ ಗ್ರಾಮ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

ಸಿ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ ಗರಿಷ್ಠ ವಯೋಮಿತಿಗೆ ಹೆಚ್ಚು 10 ವರ್ಷಗಳು.

ಡಿ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು

ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ ಗರಿಷ್ಠ ವಯೋಮಿತಿಗೆ ಹೆಚ್ಚು 10 ವರ್ಷಗಳು.

ಎಫ್) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದಲ್ಲಿ ಗರಿಷ್ಠ ವಯೋಮಿತಿಗೆ ಹೆಚ್ಚು 10 ವರ್ಷಗಳು.

ಉಪಖಂಡಿಕೆ (ಇ)ರ ಮೇರೆಗೆ ವಯೋಮಿತಿ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಸಕ್ಷಮ ಪ್ರಾಧಿಕಾರದಿಂದ ತಾನು ವಿಧವೆಯೆಂದು ಹಾಗೂ ಮರು ಮದುವೆಯಾಗಿರುವುದಿಲ್ಲವೆಂಬ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡು ನೇಮಕಾತಿ ಪ್ರಾಧಿಕಾರ ಸೂಚಿಸಿದಾಗ ಇದರ ಮೂಲ ಪ್ರತಿಯನ್ನು

ಪರಿಶೀಲನೆಗೆ ಹಾಜರುಪಡಿಸಬೇಕು ಹಾಗೂ ಉಪ ಕಂಡಿಕೆ(ಎಫ್)ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡು ನೇಮಕಾತಿ ಪ್ರಾಧಿಕಾರ ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು.

ಮೇಲ್ಕಂಡಂತೆ ವಯೋಮಿತಿ ಸಡಿಲಿಕೆ ಕೋರುವ ಅಭ್ಯರ್ಥಿಗಳು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರ/ ದಾಖಲೆಗಳನ್ನು ಪಡೆದಿಟ್ಟುಕೊಳ್ಳತಕ್ಕದ್ದು ಹಾಗೂ ಪರಿಶೀಲನೆಗೆ ಅರ್ಹವಾದಾಗ ಮೂಲ ದಾಖಲೆಗಳನ್ನು ಪರಿಶೀಲನೆಗೆ ಹಾಜರು ಪಡಿಸಬೇಕು.

**VI. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿಯಡಿ ಬರುವ ಅಭ್ಯರ್ಥಿಗಳು,ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು:–

| | | |
|---|---|---|
| ಅ) | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ–ಡಿ |
| ಆ) | ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ–ಇ |
| ಇ) | ಪ್ರವರ್ಗ– 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು | ನಮೂನೆ–ಎಫ್ |

ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಅಂದರೆ ತಹಶೀಲ್ದಾರ್‌ರವರ ಸಹಿ ಮತ್ತು ಮೊಹರು ಅಥವಾ ಬಾರ್‌ಕೋಡ್, ಹಾಲೋಗ್ರಾಮ್ ಮತ್ತು ವಾಟರ್ ಮಾರ್ಕ್‌ನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಮೀಸಲಾತಿ ಪ್ರಮಾಣ ಪತ್ರಗಳು ರದ್ದಾಗುವವರೆಗೂ ಚಾಲ್ತಿಯಲ್ಲಿರುವುದರಿಂದ, ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗಧಿಪಡಿಸಿದ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು **ಹಿಂದುಳಿದ ವರ್ಗಗಳ ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳು 5 ವರ್ಷ ಚಾಲ್ತಿಯಲ್ಲಿರುತ್ತವೆ. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಮುಂಚಿತವಾಗಿ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು** ಹಾಗೂ ಮೂಲ ದಾಖಲಾತಿ ಪರಿಶೀಲನೆಗೆ ಅರ್ಹವಾದಾಗ ಇದೇ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಅಥವಾ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, **ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು.** ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು. **(ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ಲಗತ್ತಿಸಲಾಗಿದೆ)**

**VII. ಗ್ರಾಮೀಣ ಅಭ್ಯರ್ಥಿ :–**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 59 ಶಾಸನ 2000 ದಿನಾಂಕ 06–01.2001ರನ್ವಯ ಗ್ರಾಮೀಣ ಮೀಸಲಾತಿಯಡಿ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು, ನಿಯಮಗಳ ರೀತ್ಯಾ **1 ರಿಂದ 10ನೇ ತರಗತಿಯವರೆಗೆ** ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾದಲ್ಲಿ ಮಾತ್ರ ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ **ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೇನಿ 2001 ದಿನಾಂಕ 13–02–2001ರನ್ವಯ ನಮೂನೆ–2ನ್ನು** ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ/ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲುರುಜುವಿನೊಂದಿಗೆ ಹಾಗೂ **ಈ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ / ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು** ಹಾಗೂ ಮೂಲ ದಾಖಲಾತಿ ಪರಿಶೀಲನೆಗೆ ಅರ್ಹವಾದಾಗ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. **(ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ಲಗತ್ತಿಸಲಾಗಿದೆ)**

**VIII. ಕನ್ನಡ ಮಾಧ್ಯಮ ಅಭ್ಯರ್ಥಿ :–**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಎ 71 ಸೇನೇನಿ 2001 ದಿನಾಂಕ 24–10–2002ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು **1ನೇ ತರಗತಿಯಿಂದ 10ನೇ ತರಗತಿಯವರೆಗೆ** ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಮೂಲ ದಾಖಲಾತಿ ಪರಿಶೀಲನೆಗೆ ಅರ್ಹವಾದಾಗ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. **(ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ಲಗತ್ತಿಸಲಾಗಿದೆ)**

**IX. ಅಂಗವಿಕಲ ಅಭ್ಯರ್ಥಿ :–**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ– 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3ರಷ್ಟು ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5ರಷ್ಟು ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೇನಿ 2005 ದಿನಾಂಕ: 19–11–2005ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಮಮಇ 65 ಪಿಹೆಚ್‌ಪಿ 2010 ದಿನಾಂಕ 18–02–2011ರಂತೆ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯ

ವೈದ್ಯಕೀಯ ಪ್ರಾಧಿಕಾರ / ತಾಲ್ಲೂಕು ಮಟ್ಟದ ವೈದ್ಯಕೀಯ ಪ್ರಾಧಿಕಾರ / ಜಿಲ್ಲಾ ಮಟ್ಟದ ವೈದ್ಯಕೀಯ ಪ್ರಾಧಿಕಾರ / ಬೆಂಗಳೂರು ವೈದ್ಯಕೀಯ ಪ್ರಾಧಿಕಾರ ಇವರಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿಗಳ ಪರಿಶೀಲನೆಗೆ ಅರ್ಹವಾದಾಗ ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. **ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಈ ಅಧಿಸೂಚನೆಯ ಕೊನೆಯಲ್ಲಿ ಲಗತ್ತಿಸಲಾಗಿದೆ)**

ಸರ್ಕಾರದ ಅಧಿಸೂಚನೆ–2 ಸಂಖ್ಯೆ ಡಿಪಿಎಆರ್/526/ಎಸ್‌ಆರ್‌ಆರ್/2014 ದಿನಾಂಕ 23/12/2014ರನ್ವಯ ಸಹಾಯಕ ಇಂಜಿನಿಯರ್ (ಸಿವಿಲ್) ಹುದ್ದೆಗಳನ್ನು ಈ ಕೆಳಕಂಡ ಅಂಗವೈಕಲ್ಯತೆಯುಳ್ಳ ಅಂಗವಿಕಲ ಗುಂಪುಗಳಿಗೆ ಗುರ್ತಿಸಿ ಅಧಿಸೂಚಿಸಲಾಗಿದೆ.

| ಸಹಾಯಕ ಇಂಜಿನಿಯರ್: |
|---|
| ಶ್ರವಣದೋಷ (Hearing impairment)(H.I) ಅಭ್ಯರ್ಥಿಗಳಿಗೆ |
| ಚಲನವಲನ ವೈಕಲ್ಯ (Locomotor disability or Cerebreal palsy (LD or CP) ಅಭ್ಯರ್ಥಿಗಳಿಗೆ |

**X. ಅನುಚ್ಛೇದ 371(ಜೆ)ರಂತೆ ಹೈದ್ರಾಬಾದ್ – ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ :–**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ಮೀಸಲಾತಿಯನ್ನು ಕೋರುವ ಅನುಬಂಧ–ಎ, ಬಿ, ಸಿ, ಡಿ ಯಲ್ಲಿರುವ ನಮೂನೆಯಲ್ಲಿಯೇ (ಯಾವುದು ಅನ್ವಯಿಸುತ್ತದೆಯೋ ಆ ನಮೂನೆಯಲ್ಲಿ) ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಪಡೆದಿಟ್ಟುಕೊಳ್ಳತಕ್ಕದ್ದು. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸದರಿ ಮೀಸಲಾತಿಯಡಿ ಪರಿಗಣಿಸಲಾಗುವುದಿಲ್ಲ. **ಈ ಪ್ರಮಾಣ ಪತ್ರದ ನಮೂನೆಯನ್ನು ಈ ಅಧಿಸೂಚನೆಯ ಕೊನೆಯಲ್ಲಿ ಲಗತ್ತಿಸಲಾಗಿದೆ.** ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು. **ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳು ರಾಜ್ಯ ವೃಂದಕ್ಕೆ ಸೇರಿದ ಹುದ್ದೆಗಳಿಗೂ ಇಚ್ಛಿಸಿದಲ್ಲಿ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬಹುದು.**

ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದ (eligible) ಅಭ್ಯರ್ಥಿಗಳಿಗೆ ನಿಗದಿತ ಸ್ಥಳ, ದಿನಾಂಕ ಹಾಗೂ ಭೇಟಿಯ ಮಾಹಿತಿಯನ್ನು RDPR ವೆಬ್‌ಸೈಟ್ ಮುಖೇನ, ದಿನಪತ್ರಿಕೆಯ ಪ್ರಕಟಣೆ ಮುಖಾಂತರ ತಿಳಿಸಲಾಗುವುದು.

**XI. ಅರ್ಹತಾ ಷರತ್ತುಗಳು :–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**XII. ಇಲಾಖೆಯ ಜೊತೆ ಪತ್ರ ವ್ಯವಹಾರ :**

**ಇಲಾಖೆಯು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸುವುದಿಲ್ಲ. ಆದುದರಿಂದ ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವಾಗ ಜಾಗರೂಕತೆಯಿಂದ ಭರ್ತಿ ಮಾಡತಕ್ಕದ್ದು.**

ವಿಳಾಸ ಬದಲಾವಣೆ ಇದ್ದಲ್ಲಿ ಮಾತ್ರ ಅಭ್ಯರ್ಥಿಗಳು ಲಿಖಿತ ಮೂಲಕ ನೇಮಕಾತಿ ಪ್ರಾಧಿಕಾರದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಪ್ರಾಧಿಕಾರ ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಪ್ರಾಧಿಕಾರ ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ನೇಮಕಾತಿ ಪ್ರಾಧಿಕಾರದ ಜೊತೆ ಸಂಪರ್ಕಿಸಲೇ ಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡು ಅಧ್ಯಕ್ಷರು, ವಿಶೇಷ ನೇಮಕಾತಿ ಸಮಿತಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, 1ನೇ ಮಹಡಿ, ಗ್ರಾಮೀಣಾಭಿವೃದ್ಧಿ ಭವನ, ಆನಂದರಾವ್ ವೃತ್ತ, ಬೆಂಗಳೂರು–560 009 ಈ ವಿಳಾಸಕ್ಕೆ ಸಂಪರ್ಕಿಸಿ, ಸಲ್ಲಿಸಬಹುದು.

i) ಹುದ್ದೆಯ / ವಿಳಾಸದ ಹೆಸರು
ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ / ಇ–ಮೇಲ್ ವಿಳಾಸ

**XIII: ಅಭ್ಯರ್ಥಿಗಳು ON-LINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲುಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.**

ಅಭ್ಯರ್ಥಿಗಳು ಇಲಾಖೆಯ ಅಧಿಕೃತ ವೆಬ್‌ಸೈಟ್ http://rdpr.kar.nic.in ನ್ನು ತೆರೆದು ನೇಮಕಾತಿ ವಿಭಾಗದಡಿ ಸೂಕ್ತ ಲಿಂಕ್ ("Application for the post of Assistant Engineer (Civil) ") ಒತ್ತಿ ತದನಂತರ ಕಂಪ್ಯೂಟರ್ ಪರದೆ ಮೇಲೆ ಮೂಡುವ ಮಾರ್ಗದರ್ಶನದಂತೆ ಸೂಕ್ತ ಮಾಹಿತಿಯನ್ನು ಭರ್ತಿ ಮಾಡುವುದು. ಇದಲ್ಲದೆ, ಪರದೆಯಲ್ಲಿ ಅಧಿಸೂಚನೆ, ಭಾವಚಿತ್ರ ಮತ್ತು ಸಹಿಯನ್ನು UPLOAD ಮಾಡುವ ಲಿಂಕ್‌ಗಳು ಕಂಡುಬರುತ್ತದೆ. ಅರ್ಜಿ ಭರ್ತಿ ಮಾಡುವ ಮುನ್ನ ಅಧಿಸೂಚನೆ / ಪರೀಕ್ಷಾ ಶುಲ್ಕ ಇತ್ಯಾದಿ ವಿವರಗಳು ಲಭ್ಯವಾಗಲಿದ್ದು, **ಅಭ್ಯರ್ಥಿಗಳು ಅಧಿಸೂಚನೆಯಲ್ಲಿನ ವಿವರಗಳನ್ನು ಮತ್ತು ಅರ್ಜಿ ಸಲ್ಲಿಸುವ ಸೂಚನೆಗಳನ್ನು ತಪ್ಪದೇ ಓದಿಕೊಂಡು ಅದರಂತೆ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ಅಭ್ಯರ್ಥಿಗಳು ವೆಬ್‌ಸೈಟ್‌ನಲ್ಲಿ ಲಭ್ಯವಿರುವ ಅರ್ಜಿ ನಮೂನೆಯಲ್ಲಿಯೇ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲ.**

ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವನ್ನು ಒಂದು ಸ್ವಚ್ಛವಾದ ಬಿಳಿಯ ಹಾಳೆಯ ಮೇಲೆ ಲಗತ್ತಿಸಿ ಅದರ ಕೆಳಗೆ ಕಪ್ಪುಶಾಯಿಯ ಸ್ಕೆಚ್/ಮಾರ್ಕರ್ ಪೆನ್ನಿನಿಂದ ಸಹಿಯನ್ನು ಮಾಡಿ (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು) ನಂತರ ಭಾವಚಿತ್ರ (Photo) ಮತ್ತು ಸಹಿಯನ್ನು ಒಳಗೊಂಡಂತೆ ಈ ಕೆಳಗಿನ ಅಳತೆ ಪ್ರಕಾರ ಸ್ಕ್ಯಾನ್ ಮಾಡಿ ಇಟ್ಟುಕೊಂಡಿರತಕ್ಕದ್ದು.

| | |
|---|---|
| • ಫೈಲ್ ಅಳತೆ <100 ಕೆಬಿ | |
| • ಡಿಪಿಐ ಹಿನ್ನೆಲೆ = 100 ಡಿಪಿಐ | ಪಾಸ್‌ಪೋರ್ಟ್ ಭಾವಚಿತ್ರದ ಅಳತೆಗಳು: |
| • ಇಮೇಜ್ ಅಳತೆ=100% | 45 ಎಂ ಎಂ (ಉದ್ದ) X 35 ಎಂ ಎಂ (ಅಗಲ) |
| • ಕಲರ್ | ಸಹಿ ಅಳತೆ: |
| • ಪಿಎನ್‌ಜಿ (png)/ಜೆಪಿಇಜಿ (jpeg) | 20ಎಂ ಎಂ (ಉದ್ದ) X 35 ಎಂಎಂ (ಅಗಲ) |

ನಂತರ Documents Upload button ಅನ್ನು ಒತ್ತಿ ಆನ್‌ಲೈನ್ ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು.ಈಗಾಗಲೇ ಇಲಾಖೆಯ ಮೊದಲಿನ ಅಧಿಸೂಚನೆಗೆ ಪ್ರತಿಕ್ರಿಯಿಸಿ ಅರ್ಜಿ ಶುಲ್ಕ ಸಂದಾಯ ಮಾಡಿರುವವರು ಆನ್‌ಲೈನ್ ನಲ್ಲಿ ನೀಡಿದ ಸೂಚನೆಯನುಸಾರ ಕ್ರಮ ವಹಿಸುವುದು.

ಅಭ್ಯರ್ಥಿಗಳು ತಮ್ಮ ಅರ್ಜಿ ಸ್ವೀಕೃತವಾಗಿರುವ ಬಗ್ಗೆ ತಿಳಿಯಬೇಕಾದಲ್ಲಿ, ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ 02 ದಿನಗಳ ತರುವಾಯ RDPR ವೆಬ್‌ಸೈಟ್‌ನಲ್ಲಿ ಅರ್ಜಿಯು ಸ್ವೀಕರಿಸಲಾಗಿರುವ (Acknowledgement) ಬಗ್ಗೆ ಮಾಹಿತಿಯನ್ನು ತಿಳಿಯಬಹುದಾಗಿರುತ್ತದೆ. ನಿಮ್ಮ ಅರ್ಜಿಯ ಮಾಹಿತಿ ದೊರೆಯದಿದ್ದಲ್ಲಿ ನೀವು ಪಾವತಿಸಿರುವ ಶುಲ್ಕದ ಚಲನ್/ವಿವರಗಳೊಂದಿಗೆ ಈ ಅಧಿಸೂಚನೆಯ ಕೊನೆಯಲ್ಲಿ ನೀಡಲಾದ ದೂರವಾಣಿ ಸಂಖ್ಯೆಯನ್ನು ಸಂಪರ್ಕಿಸಬಹುದಾಗಿದೆ.

**ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.**

ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳನ್ನು ಹೊರತುಪಡಿಸಿ ಇತರೆ ಪ್ರದೇಶದ ಅಭ್ಯರ್ಥಿಗಳು ರಾಜ್ಯಾದ್ಯಂತ ಇಲಾಖೆಯ ಅಧೀನದಲ್ಲಿ ಬರುವ ಯಾವುದೇ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸಲು ಬದ್ಧರಾಗಿರತಕ್ಕದ್ದು.

**XIV. ಪ್ರಾಮುಖ್ಯವಾದ ಸೂಚನೆಗಳು :–**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್/ಮಾರ್ಕರ್ ಪೆನ್‌ನಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿಗೆ UPLOAD ಮಾಡಬೇಕು. ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ON-LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೆ ಪ್ರಮಾಣ ಪತ್ರಗಳನ್ನು ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅದೇ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ಅರ್ಹರಾದಾಗ ಆ ಸಮಯದಲ್ಲಿ ಪರಿಶೀಲನೆಗೆ ಹಾಜರುಪಡಿಸಬೇಕು. ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ(ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಹೊರತು ಪಡಿಸಿ) ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು / ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

1) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಅಂಚೆ ಕಛೇರಿಯಲ್ಲಿ ಪಾವತಿಸಿದ ಚಲನ್/ವಿವರದ ಪ್ರತಿ.
2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ/ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಕೋತ್ಸವದ ಪ್ರಮಾಣ ಪತ್ರಗಳು/ಅಭ್ಯರ್ಥಿಯು ಗ್ರೇಡಿಂಗ್ ಪದ್ಧತಿ ಮೂಲಕ ಉತ್ತೀರ್ಣನಾಗಿದ್ದಲ್ಲಿ ಅದಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳು.
3) ಅಭ್ಯರ್ಥಿಯು ಗ್ರೇಡಿಂಗ್ ಪದ್ಧತಿ ಮೂಲಕ ಉತ್ತೀರ್ಣನಾಗಿದ್ದಲ್ಲಿ, KPSC ಯಲ್ಲಿ ಅನುಸರಿಸಲಾಗುತ್ತಿರುವ ಶೇಕಡಾವಾರು ಪರಿವರ್ತನಾ ಸೂತ್ರವನ್ನು **{%=(CGPA-0.75)*10}** ತತ್ಸಮಾನ ಶೇಕಡಾವಾರು ಅಂಕ ಲೆಕ್ಕಾಚಾರ ಮಾಡಲು ಅಳವಡಿಸಿಕೊಳ್ಳಲಾಗುವುದು.
4) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
5) ನಿರಾಕ್ಷೇಪಣಾ ಪತ್ರ (No Objection Certificate) (ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



6) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ/ಮಾಜಿ ಸೈನಿಕ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಬಿಡುಗಡೆ ಹೊಂದಿರುವ ಕಾರಣಗಳ ಪ್ರಮಾಣ ಪತ್ರ (ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿದ್ದಲ್ಲಿ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ) (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

7) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಲಗತ್ತಿಸಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)

8) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)

9) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

10) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ವಯೋಮಿತಿ ಸಡಿಲಿಕೆಗಾಗಿ ಮೀಸಲಾತಿ ಕೋರಿದ್ದಲ್ಲಿ)

11) ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಾಗಿ ಅರ್ಜಿ ಸಲ್ಲಿಸುವವರು ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಆರ್ ಪಿಎಲ್ಎಸ್ 2012 ದಿನಾಂಕ 6/12/2013ರಲ್ಲಿ ಗೊತ್ತುಪಡಿಸಿರುವ ನಮೂನೆ–ಎ,ಬಿ,ಸಿ,ಡಿ ಮತ್ತು ಇ ರಲ್ಲಿ ಯಾವುದು ಅನ್ವಯವಾಗುವುದೋ ಆ ನಮೂನೆಯಲ್ಲಿ ದೃಢೀಕರಣ ಪತ್ರ

**12) ಹೈದ್ರಾಬಾದ್–ಕರ್ನಾಟಕ ಪ್ರದೇಶ ಸ್ಥಳೀಯ ವೃಂದಕ್ಕೆ ಮೀಸಲಿರಿಸಿ ನಿಗದಿಪಡಿಸಿರುವ ಸಹಾಯಕ ಇಂಜಿನಿಯರ್ (ಸಿವಿಲ್)/ ಹಾಗೂ ರಾಜ್ಯಮಟ್ಟದ ವೃಂದಗಳಲ್ಲಿ ನಿಗದಿಪಡಿಸಿರುವ ಸಹಾಯಕ ಇಂಜಿನಿಯರ್ (ಸಿವಿಲ್) ಹುದ್ದೆಗಳಿಗೆ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳು ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬಹುದಾಗಿದ್ದು, ಈ ಎರಡೂ ಹುದ್ದೆಗಳಲ್ಲಿ ಅರ್ಹರಾಗಿ ಆಯ್ಕೆಗೊಂಡಲ್ಲಿ ಇದರಲ್ಲಿ ಅವರ ಮೊದಲನೇ ಆಯ್ಕೆ (First Option) ಯಾವುದು ಎಂಬುದಕ್ಕೆ ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ತನ್ನ ಲಿಖಿತ ಒಪ್ಪಿಗೆ ಪತ್ರವನ್ನು (willingness) ನೇಮಕಾತಿ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು. ಇದರಲ್ಲಿ ಯಾವುದೇ ಗೊಂದಲವಾದಲ್ಲಿ ವಿಶೇಷ ನೇಮಕಾತಿ ಸಮಿತಿಯು ತೆಗೆದುಕೊಳ್ಳುವ ತೀರ್ಮಾನವೇ ಅಂತಿಮವಾಗಿರುತ್ತದೆ**

13) ಅಂತಿಮವಾಗಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶಗಳನ್ನು ನೀಡುವ ಮುನ್ನ ಯಾವುದೇ ಹಂತದಲ್ಲಿ ಯಾವುದೇ ಕಾರಣ/ಮಾಹಿತಿ ನೀಡದೇ ಈ ನೇಮಕಾತಿ ಪ್ರಕ್ರಿಯೆಯನ್ನು ಮುಂದೂಡುವ ರದ್ದುಪಡಿಸುವ ಅಥವಾ ವಿಧಿಸಲಾಗಿರುವ ಯಾವುದೇ ಷರತ್ತನ್ನು ಸಡಿಲಗೊಳಿಸುವ ಅಥವಾ ಹೆಚ್ಚುವರಿ ಷರತ್ತನ್ನು ವಿಧಿಸುವ, ತುಂಬಲಾಗುವ ಹುದ್ದೆಗಳ ಸಂಖ್ಯೆಯನ್ನು ಬದಲಾಯಿಸುವ / ನಿರ್ಣಯಿಸುವ ಅಧಿಕಾರವನ್ನು ವಿಶೇಷ ನೇಮಕಾತಿ ಸಮಿತಿಯು ಕಾಯ್ದಿರಿಸಿಕೊಂಡಿರುತ್ತದೆ.

**XV. ವಿಶೇಷ ಸೂಚನೆಗಳು :–**

**(1)** ON-LINE ಮೂಲಕ ಅರ್ಜಿ ಸಲ್ಲಿಸುವಾಗ ಎಲ್ಲಾ ಮಾಹಿತಿಗಳನ್ನು ಸರಿಯಾಗಿ ಭರ್ತಿ ಮಾಡಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಅದರ ಒಂದು ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ಮತ್ತು ಶುಲ್ಕ ಪಾವತಿಯ ಚಲನ್ ಅನ್ನು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಭದ್ರವಾಗಿ ತೆಗೆದಿಟ್ಟುಕೊಂಡಿರತಕ್ಕದ್ದು.

**(2)** ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳು ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅನುಮತಿಯನ್ನು / ಸೇವಾ ಪ್ರಮಾಣಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು ಮತ್ತು ಇದೇ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು ತಪ್ಪಿದ್ದಲ್ಲಿ ಅನರ್ಹಗೊಳಿಸಲಾಗುವುದು.

ಹೆಚ್ಚಿನ ಮಾಹಿತಿಗಾಗಿ ಈ ಕೆಳಕಂಡ ದೂರವಾಣಿ ಸಂಖ್ಯೆಗಳಿಗೆ ಸಂಪರ್ಕಿಸಬಹುದು:

ಮುಖ್ಯ ಇಂಜಿನಿಯರ್‌ರವರ ಕಛೇರಿ –080–28015408 ಮತ್ತು 080–28015410

**XVI. ದುರ್ನಡತೆ :–**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರಿಶೀಲನೆ ಪ್ರಕ್ರಿಯೆಗಳ ಸಂದರ್ಭದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡು ಬಂದಲ್ಲಿ ಅವನು/ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಅರ್ಜಿ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ 23/03/2015 ಸಾಯಂಕಾಲ 5.30 ರೊಳಗೆ.**

**P.D. 73**

**SC-100**

**ಸದಸ್ಯ ಕಾರ್ಯದರ್ಶಿ**
ವಿಶೇಷ ನೇಮಕಾತಿ ಸಮಿತಿ,
ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ,
ಬೆಂಗಳೂರು.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59